# ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 375
2) ಸದಸ್ಯರ ಹೆಸರು : ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನಸಭೆಯಿಂದ ಚುನಾಯಿತರಾದವರು)
3) ಉತ್ತರಿಸಬೇಕಾದ ದಿನಾಂಕ : 03-02-2021
4) ಉತ್ತರಿಸಬೇಕಾದ ಸಚಿವರು : ಮಾನ್ಯ ಮೀನುಗಾರಿಕೆ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

| | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ ಜಿಲ್ಲೆಯಲ್ಲಿರುವ ಮೀನುಗಾರಿಕೆ ಇಲಾಖೆಯಿಂದ ಅನುಷ್ಠಾನಗೊಳಿಸಿದ ಯೋಜನೆಗಳಾವುವು; (ಸಂಪೂರ್ಣವಾದ ಮಾಹಿತಿ ನೀಡುವುದು) | ಬೀದರ ಜಿಲ್ಲೆಯಲ್ಲಿರುವ ಮೀನುಗಾರಿಕೆ ಇಲಾಖೆಯಿಂದ ಅನುಷ್ಠಾನಗೊಳಿಸಿದ ಯೋಜನೆಗಳ ಮಾಹಿತಿಗಳನ್ನು **ಅನುಬಂಧ-1** ರಲ್ಲಿ ನೀಡಲಾಗಿದೆ. |
| ಆ) | ಬೀದರ ಜಿಲ್ಲೆಯಲ್ಲಿರುವ 2018-19 ರಿಂದ 2020-21ನೇ ಸಾಲಿನಲ್ಲಿ ಮತ್ಸ್ಯ ಯೋಜನೆ ಅಡಿಯಲ್ಲಿ ಮಂಜೂರಾಗಿರುವ ಮನೆಗಳೆಷ್ಟು; (ವಿವರವಾದ ಮಾಹಿತಿ ಒದಗಿಸುವುದು) | 2018-19 ನೇ ಸಾಲಿನಲ್ಲಿ ಬೀದರ ಜಿಲ್ಲೆಯ ಬೀದರ್ (ದಕ್ಷಿಣ) ವಿಧಾನಸಭಾ ಕ್ಷೇತ್ರಕ್ಕೆ 10 ಮನೆಗಳನ್ನು ಮತ್ತು ಔರಾದ್ ವಿಧಾನಸಭಾ ಕ್ಷೇತ್ರಕ್ಕೆ 15 ಮನೆಗಳನ್ನು ಮಂಜೂರು ಮಾಡಲಾಗಿದೆ. 2019-20 ಮತ್ತು 2020-21 ನೇ ಸಾಲಿನಲ್ಲಿ ಯಾವುದೇ ಮನೆಗಳನ್ನು ಮಂಜೂರು ಮಾಡಿರುವುದಿಲ್ಲ. |
| ಇ) | ಜಿಲ್ಲೆಯಲ್ಲಿ ಮೀನು ಉತ್ಪಾದನೆ ಹೆಚ್ಚಿಸುವುದಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರವಾದ ಮಾಹಿತಿ ಒದಗಿಸುವುದು) | ಜಿಲ್ಲೆಯಲ್ಲಿ ಮೀನು ಉತ್ಪಾದನೆ ಹೆಚ್ಚಿಸುವ ದೃಷ್ಟಿಯಿಂದ ಸರ್ಕಾರವು ಹಲವು ಯೋಜನೆಗಳನ್ನು ಅನುಷ್ಠಾನಗೊಳಿಸಿದೆ.<br>• ಮತ್ಸ್ಯಕೃಷಿ ಆಶಾಕಿರಣ ಯೋಜನೆಯಡಿ ಇಲಾಖಾ ಕೆರೆಗಳಿಗೆ ಮೀನುಮರಿಗಳನ್ನು ಮತ್ತು ಕೃತಕ ಆಹಾರವನ್ನು ಶೇ.50ರ ಸಹಾಯಧನದಲ್ಲಿ ಅನುಷ್ಠಾನಗೊಳಿಸಲಾಗುತ್ತಿದೆ.<br>• ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ ಯೋಜನೆ ಯಡಿ ಮೀನುಗಾರರ ಸಹಕಾರ ಸಂಘಗಳು ಗುತ್ತಿಗೆ ಮೂಲಕ ಪಡೆದ ಕೆರೆಗಳಿಗೆ ಮೀನುಮರಿಗಳನ್ನು ಉಚಿತವಾಗಿ ಬಿತ್ತನೆ ಮಾಡಲಾಗಿದೆ.<br>• ಡಿಸೆಂಬರ್ ಅಂತ್ಯಕ್ಕೆ ಜಿಲ್ಲೆಯ 72 ಕೆರೆಗಳನ್ನು ವಿಲೇವಾರಿ ಮಾಡಲಾಗಿದ್ದು, ಸದರಿ ಕೆರೆಗಳಿಗೆ 21 ಲಕ್ಷ ಮೀನುಮರಿಗಳನ್ನು ಬಿತ್ತನೆ ಮಾಡಲಾಗಿರುತ್ತದೆ. |

| | | |
|---|---|---|
| | | • ಮೀನುಮರಿಗಳ ಬಿತ್ತನೆಯನ್ನು ಹೆಚ್ಚಿಸುವ ಸಲುವಾಗಿ ಗುತ್ತಿಗೆದಾರರನ್ನು ಉತ್ತೇಜಿಸಲು ಮೀನುಮರಿ ಖರೀದಿಗೆ ಶೇ.50ರ ಸಹಾಯಧನವನ್ನು ನೀಡಲಾಗುತ್ತಿದೆ.<br>• ಕೇಂದ್ರ ಪುರಸ್ಕೃತ ಪ್ರಧಾನಮಂತ್ರಿ ಮತ್ಸ್ಯಸಂಪದ ಯೋಜನೆಯಡಿ ಮೀನು ಕೃಷಿ ಕೊಳಗಳನ್ನು ನಿರ್ಮಾಣ ಮಾಡಲಾಗುತ್ತಿದೆ.<br>• ಕಾರಂಜ ಜಲಾಶಯಕ್ಕೆ 3 ಲಕ್ಷ ಮೀನುಮರಿಗಳನ್ನು ಬಿತ್ತನೆ ಮಾಡಲಾಗಿದೆ. |
| ಈ) | ಜಿಲ್ಲೆಯಲ್ಲಿ ಇಲ್ಲಿಯವರೆಗೆ ಕೆರೆಗಳ ಅಭಿವೃದ್ಧಿಗಾಗಿ ಬಿಡುಗಡೆಯಾದ ಅನುದಾನವೆಷ್ಟು? (ವಿವರವಾದ ಮಾಹಿತಿ ಒದಗಿಸುವುದು) | ಕೆರೆಗಳ ಅಭಿವೃದ್ಧಿಗಾಗಿ ಮತ್ಸ್ಯಕೃಷಿ ಆಶಾಕಿರಣ ಯೋಜನೆಯಡಿ ರೂ.20.16 ಲಕ್ಷ ಮತ್ತು ಒಳನಾಡು ಮೀನು ಕೃಷಿಗೆ ಪ್ರೋತ್ಸಾಹ ಯೋಜನೆಯಡಿ ರೂ.5.32 ಲಕ್ಷ ಅನುದಾನ ಬಿಡುಗಡೆ ಮಾಡಲಾಗಿದೆ. |

ಸಂಖ್ಯೆ: ಪಸಂಮೀ ಇ-45 ಮೀಇಯೋ 2021

(ಎಸ್. ಅಂಗಾರ)
ಮೀನುಗಾರಿಕೆ ಹಾಗೂ
ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವರು

ಮಾನ್ಯ ವಿಧಾನ ಪರಿಷತ್ ಸದಸ್ಯರಾದ ಶ್ರೀ ಅರವಿಂದ ಕುಮಾರ್ ಅರಳಿ (ವಿಧಾನ ಸಭೆಯಿಂದ ಚುನಾಯಿತರಾದವರು

ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:375 ರ

| ಅನುಬಂಧ-01 | | | |
|---|---|---|---|
| ಬೀದರ ಜಿಲ್ಲೆಯಲ್ಲಿ ಮೀನುಗಾರಿಕೆ ಇಲಾಖೆಯಿಂದ ಅನುಷ್ಠಾನಗೊಳಿಸಿದ ಯೋಜನೆಗಳ ವಿವರ | | | |
| ಕ್ರ.ಸಂ | ಯೋಜನೆಗಳ ವಿವರ | ಆರ್ಥಿಕ (ರೂ.ಲಕ್ಷಗಳಲ್ಲಿ) | ಭೌತಿಕ |
| ಜಿಲ್ಲಾ ವಲಯ | | | |
| 1 | ಮೀನುಗಾರಿಕೆ ಕಟ್ಟಡಗಳು ಮತ್ತು ಸೌಲಭ್ಯಗಳ ನಿರ್ಮಾಣ ಮತ್ತು ನಿರ್ವಹಣೆ | 10.30 | 1 ಕಟ್ಟಡ |
| 2 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ | 7.00 | 3 ಲಕ್ಷ ಬಿತ್ತನೆ ಮೀನುಮರಿಗಳು |
| 3 | ಒಳನಾಡು ಮೀನುಗಾರಿಕೆ ಅಭಿವೃದ್ಧಿಗೆ ಸಹಾಯ ಯೋಜನೆಯಡಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಮೀನುಗಾರರಿಗೆ ಮೀನು ಸಲಕರಣೆ ಕಿಟ್ಟಗಳ ವಿತರಣೆ ಯೋಜನೆ | 3.00 | 30 ಫಲಾನುಭವಿಗಳು |
| 4 | ಮೀನು ಮಾರುಕಟ್ಟೆಗಳ ಪುನರ್ನಿರ್ಮಾಣ ಮತ್ತು ಮೀನುಮಾರಾಟಕ್ಕೆ ಒದಗುವ ಸಾಮಗ್ರಿಗಳ ಖರೀದಿಗೆ ಸಹಾಯ | 1.00 | 10 ಫಲಾನುಭವಿಗಳು |
| 5 | ಪ್ರದರ್ಶನ ಮತ್ತು ತರಬೇತಿ | 3.00 | 100 ಫಲಾನುಭವಿಗಳು |
| ರಾಜ್ಯ ವಲಯ ಯೋಜನೆಗಳ ವಿವರ | | | |
| 1 | ಮೀನುಗಾರಿಕೆ ಸಲಕರಣೆ ಕಿಟ್ಟುಗಳ ಸರಬರಾಜು | 6.0 | 60 ಫಲಾನುಭವಿಗಳು |
| 2 | ರಾಷ್ಟ್ರೀಯ ಕೃಷಿ ವಿಕಾಸ ಯೋಜನೆಯಡಿ ಮೀನುಗಾರಿಕ ಸಲಕರಣೆ ಕಿಟ್ಟುಗಳ ವಿತರಣೆ | 5.50 | 55 ಫಲಾನುಭವಿಗಳು |